# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 534 |
| ಸದಸ್ಯರ ಹೆಸರು | : | ಶ್ರೀ.ವಿಜಯ್ ಸಿಂಗ್<br>(ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 24-09-2020 |
| ಉತ್ತರಿಸುವ ಸಚಿವರು | : | ಮಾನ್ಯ ಜಲಸಂಪನ್ಮೂಲ ಸಚಿವರು |

<table>
<tr><th>ಕ್ರ. ಸಂ.</th><th>ಪ್ರಶ್ನೆಗಳು</th><th>ಉತ್ತರ</th></tr>
<tr>
<td>ಅ)</td>
<td>ಬೀದರ್ ಜಿಲ್ಲೆಯ ಕಾರಂಜಾ ಜಲಾಶಯದಲ್ಲಿ ಸಂಗ್ರಹವಾಗಿರುವ ನೀರಿನ ಪ್ರಮಾಣ ಎಷ್ಟು; ಕಳೆದ ಹತ್ತು ವರ್ಷಗಳಲ್ಲಿ ಕಾರಂಜಾ ಜಲಾಶಯದ ನೀರಿನ ಬಳಕೆಯೆಷ್ಟು; (ಕುಡಿಯುವ ನೀರು ಹಾಗೂ ಕೃಷಿ ಬಳಕೆಯ ನೀರಿನ ವಿವರ ನೀಡುವುದು)</td>
<td>
ಬೀದರ ಜಿಲ್ಲೆಯ ಕಾರಂಜಾ ಜಲಾಶಯದಲ್ಲಿ ಒಟ್ಟು ನೀರು ಶೇಖರಣಾ ಸಾಮರ್ಥ್ಯ 7.691 ಟಿ.ಎಂ.ಸಿ. ಇದ್ದು, ಪ್ರಸ್ತುತ ವರ್ಷದಲ್ಲಿ ಇಲ್ಲಿಯವರೆಗಿನ ದಿನಾಂಕ: 21-09-2020 ಬೆಳಿಗ್ಗೆ 9.00 ಗಂಟೆಯವರೆಗೆ ಸಂಗ್ರಹವಾಗಿರುವ ನೀರಿನ ಪ್ರಮಾಣ 3.987 ಟಿ.ಎಂ.ಸಿ. (51.83%) ಇರುತ್ತದೆ.
ಕಾರಂಜಾಜಲಾಶಯದಿಂದ ಕಳೆದ ಹತ್ತು ವರ್ಷಗಳಲ್ಲಿ ಒಳ ಹರಿವು ಕೃಷಿ ಬಳಕೆಯ ಮತ್ತು ಹೊರ ಹರಿವಿನ ವಿವರಗಳು ಈ ಕೆಳಗಿನಂತಿವೆ.
<table>
<tr><th rowspan="2">ಕ್ರ. ಸಂ.</th><th rowspan="2">ವರ್ಷ</th><th rowspan="2">ಒಳಹರಿವು (ಟಿ.ಎಂ.ಸಿ)</th><th colspan="2">ಬಳಕೆ ಟಿಎಂಸಿ</th></tr>
<tr><th>ನೀರಾವರಿಗೆ ಟಿ.ಎಂ.ಸಿ.</th><th>ನದಿಗೆ ಹೊರ ಹರಿವು (ಹೆಚ್ಚುವರಿ/ಕುಡಿಯುವ ನೀರಿಗೆ) ಟಿ.ಎಂ.ಸಿ.</th></tr>
<tr><td>1</td><td>2010-11</td><td>10.342</td><td>4.05</td><td>5.93</td></tr>
<tr><td>2</td><td>2011-12</td><td>1.326</td><td>4.77</td><td>0.41</td></tr>
<tr><td>3</td><td>2012-13</td><td>1.604</td><td>2.82</td><td>0.00</td></tr>
<tr><td>4</td><td>2013-14</td><td>4.633</td><td>0.63</td><td>0.00</td></tr>
<tr><td>5</td><td>2014-15</td><td>0.242</td><td>2.30</td><td>0.00</td></tr>
<tr><td>6</td><td>2015-16</td><td>0.143</td><td>0.00</td><td>0.00</td></tr>
<tr><td>7</td><td>2016-17</td><td>8.159</td><td>0.35</td><td>1.15</td></tr>
<tr><td>8</td><td>2017-18</td><td>4.360</td><td>0.83</td><td>1.17</td></tr>
<tr><td>9</td><td>2018-19</td><td>0.149</td><td>4.54</td><td>0.00</td></tr>
<tr><td>10</td><td>2019-20</td><td>0.238</td><td>0.00</td><td>0.00</td></tr>
<tr><td>11</td><td>2020-21</td><td>0.419</td><td>0.00</td><td>0.00</td></tr>
</table>
ಕುಡಿಯುವ ನೀರಿನ ಸಲುವಾಗಿ ಪ್ರತಿ ವರ್ಷ 1.0053 ಟಿ.ಎಂ.ಸಿ. ಉಪಯೋಗಿಸುತ್ತಿದ್ದು, ವಿವರಗಳ ಈ ಕೆಳಗಿನಂತಿವೆ.
<table>
<tr><td>1</td><td>ಬೀದರ್ ತಾಲೂಕು</td><td>0.387 ಟಿ.ಎಂ.ಸಿ.</td></tr>
<tr><td>2</td><td>ಭಾಲ್ಕಿ ತಾಲೂಕು</td><td>0.300 ಟಿ.ಎಂ.ಸಿ.</td></tr>
<tr><td>3</td><td>ಹುಮನಾಬಾದ ಮತ್ತು ಚಿಟಗುಪ್ಪಾ</td><td>0.30 ಟಿ.ಎಂ.ಸಿ.</td></tr>
<tr><td>4</td><td>ಬೀದರ್ ತಾಲೂಕಿನ ಕಮಠಾಣಾ ಗ್ರಾಮ ಹಾಗೂ ಇತರೆ ಹಳ್ಳಿಗಳಿಗೆ, ಹುಮನಾಬಾದ ಮತ್ತು ಇತರೆ ಹಳ್ಳಿಗಳಿಗೆ.</td><td>0.0183 ಟಿ.ಎಂ.ಸಿ.</td></tr>
<tr><td></td><td>ಒಟ್ಟು</td><td>1.0053 ಟಿ.ಎಂ.ಸಿ.</td></tr>
</table>
</td>
</tr>
</table>

| | | |
|---|---|---|
| ಆ) | ಬೀದರ್ ಜಿಲ್ಲೆಯ ಕಾರಂಜಾ ಜಲಾಶಯದಲ್ಲಿ ನೀರು ಸಂಗ್ರಹಣೆ ಕುಂಠಿತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಕಾರಂಜಾ ಜಲಾಶಯಕ್ಕೆ ಕೃಷ್ಣ ಅಥವಾ ಗೋದಾವರಿ ನದಿಯ ನೀರನ್ನು ಹರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಬೀದರ್ ಜಿಲ್ಲೆಯ ಕಾರಂಜಾ ಜಲಾಶಯದಲ್ಲಿ ನೀರು ಸಂಗ್ರಹಣೆ ಕುಂಠಿತವಾಗಿರುವುದು ಸರ್ಕಾರದ ಗಮನದಲ್ಲಿರುತ್ತದೆ.<br><br>ಗೋದಾವರಿ ಕಣಿವೆಯಲ್ಲಿ ಬರುವ ಮಾಂಜ್ರಾ ನದಿಯಿಂದ ನೀರನ್ನೆತ್ತಿ ಕಾರಂಜಾ ಜಲಾಶಯ ತುಂಬಿಸುವ ಯೋಜನೆಯು ಕರ್ನಾಟಕ ನೀರಾವರಿ ನಿಗಮ ಮಟ್ಟದ ಪರಿಶೀಲನಾ ಹಂತದಲ್ಲಿದೆ. |
| ಇ) | ಬೀದರ್ ಜಿಲ್ಲೆಯ ಕಾರಂಜಾ ಜಲಾಶಯದ ನಿರ್ವಹಣೆಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ: ಇದರಲ್ಲಿ ಖರ್ಚಾದ ಅನುದಾನ ಎಷ್ಟು? (ವಿವರ ನೀಡುವುದು) | ಬೀದರ ಜಿಲ್ಲೆಯ ಕಾರಂಜಾ ಜಲಾಶಯದ ನಿರ್ವಹಣೆಗೆ ಪ್ರಸ್ತುತ 2020-21ನೇ ಸಾಲಿನಲ್ಲಿ ರೂ.156.70ಲಕ್ಷ ಅನುದಾನ ಒದಗಿಸಲಾಗಿರುತ್ತದೆ. ಇಲ್ಲಿಯವರೆಗೆ ರೂ.55.965 ಲಕ್ಷಗಳ ಆರ್ಥಿಕ ಪ್ರಗತಿ ಸಾಧಿಸಲಾಗಿದೆ. |

ಸಂಖ್ಯೆ:ಜಸಂಇ 118 ಎಂಎಲ್ಎ 2020

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು